ಏನು ಧನ್ಯಳೋ । ಲಕುಮಿ ಎಂಥ ಮಾನ್ಯಳೋ ।
ಸಾನುರಾಗದಿಂದ ಹರಿಯ । ತಾನೆ ಸೇವೆ ಮಾಡುತಿಹಳು ॥ ಅ ಪ ॥

ಕೋಟಿ ಕೋಟಿ ಭೃತ್ಯರಿರಲು । ಹಾಟಕಾಂಬರನ ಸೇವೆ ।
ಸಾಟಿಯಿಲ್ಲದೆ ಮಾಡಿ ಪೂರ್ಣ । ನೋಟದಿಂದ ಸುಖಿಸುತಿಹಳು ॥ ೧ ॥

ಛತ್ರ ಚಾಮರ ವ್ಯಜನ । ಪರಿಯಂಕ ಪಾತ್ರರೂಪದಲಿ ನಿಂತು ।
ಚಿತ್ರಚರಿತನಾದ ಹರಿಯ ನಿತ್ಯ । ಸೇವೆ ಮಾಡುತಿಹಳು ॥ ೨ ॥

ಸರ್ವತ್ರದಿ ವ್ಯಾಪಕನಾದ । ಸರ್ವದೋಷರಹಿತನಾದ ।
ಸರ್ವ ವೃಂದನಾದ । ಪುರಂದರ ವಿಠಲನ ಸೇವಿಸುವಳು ॥ ೩ ॥